


# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## **ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 04-03-2021 ಪ್ರಶ್ನೆ ಸಂಖ್ಯೆ : 533 (682)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಮರಿತಿಬ್ಬೇಗೌಡ(ಶಿಕ್ಷಕರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 04-03-2021

ಉತ್ತರಿಸುವ ಸಚಿವರು: ಮಾನ್ಯ ಮುಖ್ಯಮಂತ್ರಿಗಳು

ವಿಷಯ : ಖಾಲಿ ಇರುವ ಬೋಧಕ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ

(ಅ) ಅನುದಾನಿತ ಶಾಲಾ ಕಾಲೇಜುಗಳಲ್ಲಿ 2015ನೇ ಸಾಲಿನವರೆಗೆ ಖಾಲಿ ಇರುವ ಬೋಧಕ ಹುದ್ದೆಗಳನ್ನು ಭರ್ತಿ ಮಾಡಲು ಹಾಗೂ 1986 ರಿಂದ 1995ನೇ ಸಾಲಿನವರೆಗಿನ ಕನ್ನಡ ಮಾಧ್ಯಮ ಶಾಲೆಗಳಿಗೆ ಹೊಸದಾಗಿ ವೇತನಾನುದಾನಕ್ಕೆ ಒಳಪಡಲು ಸರ್ಕಾರಕ್ಕೆ ಬಂದಿರುವ ಪ್ರಸ್ತಾವನೆಗಳಿಗೆ ಆರ್ಥಿಕ ಇಲಾಖೆಯಿಂದ ಆರ್ಥಿಕ ಮಿತವ್ಯಯ ಕಾರಣ ನೀಡಿ ತಡೆಹಿಡಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಸದರಿ ನೇಮಕಾತಿ ಪ್ರಕ್ರಿಯೆಯಲ್ಲಿರುವ ಬೋಧಕರಿಗೆ ವಯೋಮಿತಿ ಮೀರುತ್ತಿರುವುದರಿಂದ ಅವರು ತೊಂದರೆಗೊಳಪಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ಹಾಗಾದಲ್ಲಿ ಈ ನಿಟ್ಟಿನಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರಗಳೊಂದಿಗೆ ಮಾಹಿತಿ ಒದಗಿಸುವುದು)

(ಈ) ಯಾವ ಕಾಲಮಿತಿಯಲ್ಲಿ ಆರ್ಥಿಕ ಮಿತವ್ಯಯವನ್ನು ಸಡಿಲಿಸಿ, ಸದರಿ ಕಡತಗಳಿಗೆ ಮಂಜೂರಾತಿ ನೀಡಲಾಗುವುದು?